ಡಾ|| ಬಿ. ನಂಜುಂಡಸ್ವಾಮಿ*

# ಹೊನ್ನುಡುಕೆ ಕೆಂಪಸೋಮಯ ಒಡೆಯರ ಶಾಸನ

ಪ್ರಸ್ತುತ ಶಾಸನವು ಈಗ ಹೊನ್ನುಡಿಕೆಯಲ್ಲಿ ವಾಸವಾಗಿರುವ ಗುಬ್ಬಿ ಹೊಸಹಳ್ಳಿ ಹಿರೇಮಠದ ಲಿಂ|| ಚನ್ನಬಸವ ಆರಾಧ್ಯರ ಮನೆಯಲ್ಲಿದೆ. ಇದು ಹತ್ತೂವರೆ ಅಂಗುಲ ಉದ್ದ ಎಂಟೂವರೆ ಅಂಗುಲ ಅಗಲ ೮೦೦ ಗ್ರಾಂ ತೂಕದ ಮೂರು ಮಿಲಿಮೀಟರ್ ದಪ್ಪದ ತಾಮ್ರ ಶಾಸನದ ಮೇಲೆ ಯಾವ ಮುದ್ರೆಯೂ ಇಲ್ಲ. ಹಿಂದೆ ಸೂರ್ಯ ಚಂದ್ರ ಮತ್ತು ಲಿಂಗು ಇರುವ ಲಿಂಗಮುದ್ರೆಯ ಚಿಹ್ನೆ ಬರೆದಿದೆ. ಅಕ್ಷರಗಳು ಮತ್ತು ಅವುಗಳ ರೂಪವು ಸ್ಖಾಲಿತ್ಯದಿಂದ ಕೂಡಿದೆ.

ಈ ಶಾಸನದಲ್ಲಿ ಲಿಪಿ ದೋಷಗಳು ಬಹಳ ಇರುವುದರಿಂದ, ನಮಗೆ ರಾಜನ ಹೆಸರು ಸ್ಪಷ್ಟವಾಗಿ ಗೊತ್ತಾಗಿರುವುದರಿಂದ ಸುಮಾರು ಕ್ರಿ. ಶ. ೧೫೦೦ರ ಸುಮಾರಿಗೆ ಸೇರುತ್ತದೆಂದು ಊಹಿಸಬಹುದು. ವೀರ ನರಸಿಂಹ ಉಲ್ಲೇಖ ಬಂದಿರುವುದರಿಂದ ಆತನ ಕಾಲದಲ್ಲಿ ಗುಬ್ಬಿ ಹೊಸಹಳ್ಳಿ ಪಾಳೆಪಟ್ಟು ವಿಜಯನಗರದ ಅರಸರ ಆಳ್ವಿಕೆಗೆ ಸೇರಿತ್ತೆಂಬುದನ್ನು ತೋರಿಸುತ್ತದೆ. ಇದನ್ನು ಗುಬ್ಬಿ ಹೊಸಹಳ್ಳಿ ಅರಸರ ಮನೆಯಲ್ಲಿ ಇರುವ ದಾಖಲೆಗಳು ಪುಷ್ಟೀಕರಿಸುತ್ತವೆ.

ಕೆಂಪಸೋಮಯ ಒಡೆಯರಿಗೆ ಎಂದು ಹೇಳಿರುವ ಈ ಒಡೆಯರು ಗುಬ್ಬಿ ಹೊಸಹಳ್ಳಿಯಲ್ಲಿ ಇದ್ದ ಸೋಮಕಟ್ಟೆ ಮಠದ ಸ್ವಾಮಿಗಳೆ ? ಈಗ ಸೋಮುಕಟ್ಟೆ ಮಠ ಪೂರ್ಣವಾಗಿ ಜೀರ್ಣವಾಗಿದೆ. "ಗುಬ್ಬಿಯ ಸ್ವಾಮಿಯ" ಎಂದು ಸ್ಪಷ್ಟವಾಗಿ ಬರೆದಿರುವ ಈ ಸ್ವಾಮಿ ಗುಬ್ಬಿ ಶ್ರೀ ಚನ್ನಬಸವೇಶ್ವರರಾಗಿರುತ್ತಾರೆ. ಗುಬ್ಬಿಯಲ್ಲಿ ಈಗಲೂ ಗುಬ್ಬಿಯಪ್ಪ, ಗುಬ್ಬಿಸ್ವಾಮಿ ಎಂದೇ ಭಕ್ತರು ಕರೆಯುವುದು. ಅವರ ಬಗ್ಗೆ ಸಿಕ್ಕ ಪ್ರಥಮ ಲಿಖಿತ ದಾಖಲೆ ಇದು.

ಬಿದರೆಸೀಮೆ ಮಧ್ಯದ ಗೋಪುಪ್ರರ ಇಂದು ಗೌರಿಪುರವಾಗಿದೆ. ಭೂಮಿಯ ೩೦೧ನಿ ತೆಂಕಲು ಅಮ್ಮನಕೆರೆ—ಈಗ ಅಮ್ಮನಘಟ್ಟವಾಗಿದೆ. ಪಡವಲು ಲಕ್ಕೇನಹಳ್ಳಿ, ಬಡಗಲು ಚನ್ನಶೆಟ್ಟಿಹಳ್ಳಿ ಹೀಗೆ ಇಲ್ಲಿ ಬಂದಿರುವ ಎಲ್ಲಾ ಹಳ್ಳಿಗಳನ್ನು ಈಗಲೂ ಗುರುತಿಸಬಹುದಾಗಿದೆ. ಚನ್ನಶೆಟ್ಟಿಹಳ್ಳಿಯಲ್ಲಿ ಗುಬ್ಬಿ ಶ್ರೀ ಚನ್ನಬಸವೇಶ್ವರರು ತಪಸ್ಸು ಮಾಡಿದ ಜಾಗದಲ್ಲಿ ಗುಬ್ಬಿ ಹೊಸಹಳ್ಳಿ ಅರಸರು ಭವ್ಯವಾದ ದೇವಾಲಯ ಕಟ್ಟಿಸಿ ಅವರ ಪವಾಡಗಳ ಬಗ್ಗೆ ರೇಖಾಚಿತ್ರಗಳನ್ನು ಕಲ್ಲಿನಲ್ಲಿ ಮೇಲು ಭಾಗದಲ್ಲಿ ಬಿಡಿಸಿದ್ದಾರೆ. ಶಾಸನದ ಅಂತ್ಯದಲ್ಲಿ ವಿಜಯನಗರದ ಅರಸರ ಒಪ್ಪವಾದ ಶ್ರೀ ವಿರೂಪಾಕ್ಷ ಎಂಬುವನ್ನು ಬರೆದಿದೆ.

ನಮೂದಿತವಾಗಿರುವ ಕಾಲದ ಒಂದು ವ್ಯತ್ಯಾಸ ಬಿಟ್ಟರೆ ಮಿಕ್ಕ ಎಲ್ಲಾ ವಿಷಯಗಳ ತಾಳೆಯಾಗುತ್ತದೆ ಎಡೆಯೂರು ಸಿದ್ಧಲಿಂಗೇಶ್ವರರ ಕಾಲ 1560 ಎಂದು ಸ್ಥಿರವಾಗಿದೆ. ಅವರ ಗುರುಗಳಾದ ಶ್ರೀ ಗೋಸಲ ಚನ್ನಬಸವೇಶ್ವರರ ಕಾಲ 1510ರ ತನಕ ಎಂದು ಇಟ್ಟು

* ತಾರಾನಾಥ ಆಯುರ್ವೇದ ಔಷಧಾಲಯ, ತುಮಕೂರು ಕಾಂಪ್ಲೆಕ್ಸ್, ತುಮಕೂರು.

ಕೊಂಡರೆ ಈ ಶಾಸನ 1500ರಷ್ಟು ಆಗುತ್ತದೆ. ಈ ದೋಷವನ್ನು ನಾವು ಒಪ್ಪದೆ ಹೋದರೆ ಇದು ಕೂಟ ಶಾಸನ ಎಂದು ಕರೆಯಬೇಕಾಗುತ್ತದೆ. ಇದರಲ್ಲಿ ಬಹಳಷ್ಟು ಕಾಗುಣಿತ ದೋಷ ಇರುವುದರಿಂದ ಲಿಪಿಗಾರನಿಗೆ ಅಕ್ಷರ ಜ್ಞಾನ ಅಷ್ಟು ಇಲ್ಲದೆ ಹೋಗಿರುವುದರಿಂದ ಕಾಲ ಒಂದು ತಿದ್ದುಪಡಿಯಾದರೆ ಗೊಂದಲ ಕಡಿಮೆ ಯಾಗುತ್ತದೆ. ಇದು ಒಂದು ಶಾಸನದ ಪ್ರತಿರೂಪ ಇರಬಹುದು.

## ಹಾಲಿ ಹೊನ್ನುಡಿಕೆಯಲ್ಲಿ ಇರುವ ಗುಬ್ಬಿ ಹೊಸಹಳ್ಳಿ ಹಿರೇಮಠದ ಲಿಂ|| ಚನ್ನಬಸವ ಆರಾಧ್ಯರ ಮನೆಯಲ್ಲಿ ಇದ್ದ ಶಾಸನ

### ಶಾಸನ ಪಾಠ

○ ಸಸ್ತಿ ಶ್ರೀ ವಿಜಯಾಭುದಯ ಶಾಲಿವಾಹನ ೧
ಶಕ ವರುಶ ೧೩೩೧ನೆಯ ಪರ ಸಂವತ್ಸರದ ೨
ವಯಶಾಖ ಶು ೫ಲು ಶ್ರಿಮನ್ನು ಮಹಾಮಂಡಲೆ ೩
ಶ್ವರ ರಾಜಾತಿರಾಜರಾಜಪರಮೇಶ್ವರ ಶಿ ವಿರಪ್ರ ೪
ತಾಪನ ವಾರೀ ಸಾಳ ವಿರನರಸಿಂಗ ರಾಯ ದೆವ ಮಹಾ ೫
ರಾಯರವರ ಕಾರ್ಯಕರರ್ತರಾದ ನರಸಂಣ ನಾ ೬
ಯಕರವರ ತಾಯಿ ಗೌರಪಂಮನು ಕೆಂಪ ಸೊಮೆಯ ೭
ವೊಡೆಯರಿಗೆ ಕೂಟ ತಾಂಬ್ರಸಾಸನದ ಕ್ರಮ ೮
ರೆಂದರೆ ಗುಬಿಯ ಸಾಮಿಯ ಬಿದಿರೆಯ ಸೀಮೆ ೯
ಮದ್ಯದ ಗೊಪುಪುರದ ಗಾಮವನು ಸರ್ವ ಮಾನ್ಯ ೧೦
ದಯಾದರೆವಾಗಿ ಆ ಗಾಮಕೆ ಬೂದಲು ಮ ೩೩೦ನಿ ೧೧
ನಡವುಳ್ಳ ತೆಂಕಲು ಆಂಮನಕಟಿತು ಪಡವಲು ೧೨
ಲಖೆನಹಳಿ ಬಡಗಲು ಬೆವನೆಜರಂ ವಿರೂಡ ಉ ೧೩
ಆ ಗೋಪಪುರದ ಬಾಗಲುಲು ಚತುಸೀಮೆಯುಂ ಸಕ ಆ ೧೪
ಸ್ವಾಮ ನಿದಿನಿಕ್ಷೇಪ ಜಲ ಪಾಶಣ ಎನ್ನುಂಟು ದ ಸ ೧೫
ವ ಸಾಮವನು ಅನುಭವಿಸಿ ಬರುವದು ಅಂಮ ೧೬
ಕೊಟ ತಾಂಬ ಶಾಸನ ಸ್ಥಳದವರ ಒಬತನಾಡ ಗಉ ೧೭
ಡ ಗುಬಿ ಲಿಂಗಪಗಉಡ ಚಂನಿಸೆಟಿರೊಳವ ಶ್ರಿ ೧೮
ಗೊಂಪ ಗಉಡ ಲಖೆನಹಳಿ ಮಲಿ ಗೊಂಡ ಗಉಡ ೧೯